# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಸೂರಜ್ ರೇವಣ್ಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **140** |
| ಉತ್ತರಿಸಬೇಕಾದ ದಿನಾಂಕ | : | 16.02.2022 |
| ಉತ್ತರಿಸಬೇಕಾದ ಸಚಿವರು | : | ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | 2021-22 ನೇ ಸಾಲಿನ ಜುಲೈ ಮತ್ತು ಆಗಸ್ಟ್ ಮಾಹೆಯಲ್ಲಿ ಹೊಳೆನರಸೀಪುರ ತಾಲ್ಲೂಕಿನಲ್ಲಿ ಸುರಿದ ಭಾರಿ ಮಳೆಯಿಂದಾಗಿ ಗ್ರಾಮಗಳಲ್ಲಿ "ಎ" ಕ್ಯಾಟಗರಿಯಲ್ಲಿ 19 ಮನೆಗಳು, "ಬಿ" ಕ್ಯಾಟಗರಿಯಲ್ಲಿ 79 ಮನೆಗಳು ಮತ್ತು "ಸಿ" ಕ್ಯಾಟಗರಿಯಲ್ಲಿ 34 ಒಟ್ಟಾರೆ 132 ಮನೆಗಳು ಬಿದ್ದು ಹೋಗಿರುವುದು ನಿಜವೇ; | ಹೌದು. |
| ಆ) | ಸದರಿ ಮನೆಗಳ ವಿವರಗಳನ್ನು ರಾಜೀವ್ ಗಾಂಧಿ ವಸತಿ ನಿಗಮದ ತಂತ್ರಾಂಶದಲ್ಲಿ ದಾಖಲಿಸಿರುವುದು ನಿಜವೇ; ಹಾಗಿದ್ದಲ್ಲಿ, ಫಲಾನುಭವಿಗಳಿಗೆ ಯಾವ ಕಾಲಮಿತಿಯಲ್ಲಿ ಹಣ ಬಿಡುಗಡೆಗೊಳಿಸಲಾಗುವುದು; (ಸಂಪೂರ್ಣ ಮಾಹಿತಿ ನೀಡುವುದು) | ಹೌದು.<br><br>ರಾಜೀವ್ ಗಾಂಧಿ ವಸತಿ ನಿಗಮದ ತಂತ್ರಾಂಶದಲ್ಲಿ ತಹಶಿಲ್ದಾರರು ನಮೂದಿಸಿರುವ ಮನೆಗಳ ವಿವರಗಳನ್ನು ಜಿಲ್ಲಾಧಿಕಾರಿಗಳು ಅಂತಿಮವಾಗಿ ಅನುಮೋದಿಸಿ, ಸರ್ಕಾರದ ಆದೇಶ ಸಂಖ್ಯೆ: ಕಂಇ 335 ಟಿಎನ್ಆರ್ 2021(1), ದಿನಾಂಕ: 23.11.2021 ರನ್ವಯ "ಎ" ಮತ್ತು "ಬಿ" ವರ್ಗ ಮನೆ ಹಾನಿ ಪ್ರಕರಣಗಳಿಗೆ SDRF/NDRF ಮಾರ್ಗಸೂಚಿಯಂತೆ ರೂ.95,100/-ಗಳ ಹಾಗೂ "ಸಿ" ವರ್ಗದ ಮನೆ ಹಾನಿ ಪ್ರಕರಣಗಳಿಗೆ ತಲಾ ರೂ.50,000/-ಗಳ ಪರಿಹಾರವನ್ನು ಜಿಲ್ಲಾಧಿಕಾರಿಗಳು ಪಿಡಿ ಖಾತೆಯಿಂದ ಪಾವತಿಸಬೇಕಿದ್ದು, ಅದರಂತೆ ಈವರೆಗೂ ಒಟ್ಟು ರೂ.2.41 ಕೋಟಿಗಳ ಪರಿಹಾರ ಧನವನ್ನು ಫಲಾನುಭವಿಗಳಿಗೆ ಜಿಲ್ಲಾಧಿಕಾರಿಗಳು/ ತಹಶೀಲ್ದಾರರು ನೀಡಿರುವುದಾಗಿ ತಂತ್ರಾಂಶದಲ್ಲಿ ನಮೂದಿಸಿರುತ್ತಾರೆ(ದಿನಾಂಕ: 11.02.2022ರಲ್ಲಿದಂತೆ). ಉಳಿದ ಪರಿಹಾರ ಧನವನ್ನು ಪ್ರಗತಿಗನುಗುಣವಾಗಿ DBT ಆಧಾರ್ ಆಧಾರಿತವಾಗಿ ಫಲಾನುಭವಿಗಳ ಬ್ಯಾಂಕ್ ಖಾತೆಗೆ ಬಿಡುಗಡೆಗೊಳಿಸಲು ಕ್ರಮ ವಹಿಸಲಾಗುತ್ತದೆ. ವಿವರ ಕೆಳಕಂಡಂತಿದೆ.<br><br>(ರೂ.ಕೋಟಿಗಳಲ್ಲಿ) |

| ಹಾನಿಯಾದ ಮನೆಯ ವರ್ಗ | ಗ್ರಾಮೀಣ | ನಗರ | ಒಟ್ಟು |
|---|---|---|---|
| ಸಂಪೂರ್ಣ-ಎ | 0.29 | 0.01 | 0.30 |
| ಭಾಗಶಃ-ಬಿ | 0.02 | 0.00 | 0.02 |
| ಭಾಗಶಃ-ದುರಸ್ಥಿ-ಬಿ1 | 0.39 | 0.03 | 0.42 |
| ಭಾಗಶಃ-ಪುನರ್ ನಿರ್ಮಾಣ-ಬಿ2 | 1.07 | 0.03 | 1.10 |

| | | | |
|---|---|---|---|
| ಅಲ್ಪಸ್ವಲ್ಪ-ಸಿ | 0.53 | 0.04 | 0.57 |
| **ಒಟ್ಟು** | **2.30** | **0.11** | **2.41** |

ಇ) ಹೊಳೆನರಸೀಪುರ ತಾಲ್ಲೂಕಿನಾದ್ಯಂತ ಪ್ರಸ್ತುತ ನವೆಂಬರ್ ತಿಂಗಳಲ್ಲಿ ಸುರಿದಿರುವ ಭಾರಿ ಮಳೆಯಿಂದಾಗಿ ದಿನಾಂಕ:23.11.2021 ರವರೆಗೆ "ಎ" ಕ್ಯಾಟಗರಿಯಲ್ಲಿ "ಬಿ" ಕ್ಯಾಟಗರಿಯಲ್ಲಿ ಮತ್ತು "ಸಿ" ಕ್ಯಾಟಗರಿಯಲ್ಲಿ ಬಿದ್ದು ಹೋಗಿರುವ ಮನೆಗಳೆಷ್ಟು; ಮನೆಗಳನ್ನು ಕಳೆದುಕೊಂಡಿರುವ ಸಂತ್ರಸ್ಥರಿಗೆ ಮನೆ ನಿರ್ಮಿಸಿಕೊಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು ? (ಸಂಪೂರ್ಣ ಮಾಹಿತಿ ನೀಡುವುದು)

ಹೊಳೆನರಸೀಪುರ ತಾಲ್ಲೂಕಿನಲ್ಲಿ 2021-22 ನೇ ಸಾಲಿನಲ್ಲಿ ಜುಲೈ ರಿಂದ ನವೆಂಬರ್ ಮಾಹೆಯವರೆಗೆ ಸುರಿದ ಭಾರಿ ಮಳೆಯಿಂದಾಗಿ ಒಟ್ಟು 307 ಮನೆಗಳು ಹಾನಿಯಾಗಿರುವುದಾಗಿ ಜಿಲ್ಲಾಧಿಕಾರಿಗಳು ಅನುಮೋದಿಸಿರುತ್ತಾರೆ. ವರ್ಗವಾರು ವಿವರ ಕೆಳಕಂಡಂತಿದೆ.

| ಹಾನಿಯಾದ ಮನೆಯ ವರ್ಗ | ಗ್ರಾಮೀಣ | ನಗರ | ಒಟ್ಟು |
|---|---|---|---|
| ಸಂಪೂರ್ಣ-ಎ | 31 | 1 | 32 |
| ಭಾಗಶಃ-ಬಿ | 2 | 0 | 2 |
| ಭಾಗಶಃ-ದುರಸ್ಥಿ-ಬಿ1 | 41 | 3 | 44 |
| ಭಾಗಶಃ-ಪುನರ್ ನಿರ್ಮಾಣ-ಬಿ2 | 113 | 3 | 116 |
| ಅಲ್ಪಸ್ವಲ್ಪ-ಸಿ | 105 | 8 | 113 |
| **ಒಟ್ಟು** | **292** | **15** | **307** |

2021-22 ನೇ ಸಾಲಿನಲ್ಲಿ ಸುರಿದ ಭಾರಿ ಮಳೆ/ಪ್ರವಾಹ/ನೆರೆಹಾವಳಿಯಿಂದ ಹಾನಿಗೊಳಗಾದ ಕುಟುಂಬಗಳಿಗೆ ವಸತಿ ಸೌಕರ್ಯ ಒದಗಿಸಲು ನೆರೆಸಂತ್ರಸ್ಥರ ಪುನರ್ವಸತಿ ಯೋಜನೆಯನ್ನು ಜಾರಿಗೊಳಿಸಲಾಗಿದೆ.

ಸರ್ಕಾರದ ಆದೇಶ/ಮಾರ್ಗಸೂಚಿಗಳನ್ವಯ ಸದರಿ ಯೋಜನೆಯಡಿ ನೆರೆಹಾವಳಿಗೆ ತುತ್ತಾಗಿ ಹಾನಿಗೊಳಗಾದ ಮನೆಗಳ ಹಾನಿ ಪ್ರಮಾಣವನ್ನು ಸಂಬಂಧಪಟ್ಟ ಅಧಿಕಾರಿಗಳು ಸಮೀಕ್ಷೆ ಮಾಡಿ ಹಾನಿಗೊಳಗಾದ ಮನೆಯ ವರ್ಗವನ್ನು ಎ, ಬಿ2, ಬಿ1 ಮತ್ತು ಸಿ ಎಂದು ವಿಂಗಡಿಸಿ, ತಹಸೀಲ್ದಾರ್ ರವರು ನಮೂದಿಸಿ, ಜಿಲ್ಲಾಧಿಕಾರಿಗಳಿಂದ ಅನುಮೋದನೆಗೊಂಡ ಫಲಾನುಭವಿಗಳು ನಿರ್ಮಿಸಿರುವ ಮನೆಗಳ ವಿವಿಧ ಹಂತಗಳ ಜಿಪಿಎಸ್ ಛಾಯಾಚಿತ್ರಗಳನ್ನು ಗ್ರಾಮೀಣ ಪ್ರದೇಶದಲ್ಲಿ ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳು ಹಾಗೂ ನಗರ ಪ್ರದೇಶದಲ್ಲಿ ನಗರ ಸ್ಥಳೀಯ ಸಂಸ್ಥೆಗಳ ಅಧಿಕಾರಿಗಳು ಪುನರ್ವಸತಿ ಮೊಬೈಲ್ ಆ್ಯಪ್ ಮೂಲಕ ಜಿಪಿಎಸ್ ಮಾಡಿದ ನಂತರ ತಹಶೀಲ್ದಾರ್ ರವರು ಪರಿಶೀಲಿಸಿ, ಅರ್ಹಗೊಳಿಸಿ (Audit), ಅನುದಾನ ದೃಢೀಕರಣ (Payment Certification) ನೀಡಿದ ಪ್ರಗತಿಯಲ್ಲಿರುವ ಎಲ್ಲಾ ಮನೆಗಳಿಗೆ ಪ್ರಗತಿಗೆ ಅನುಗುಣವಾಗಿ DBT ಆಧಾರ್ ಆಧಾರಿತವಾಗಿ ಫಲಾನುಭವಿಗಳ ಖಾತೆಗೆ ಪರಿಹಾರಧನ ಪಾವತಿಸಲಾಗುತ್ತಿದೆ.

ಸರ್ಕಾರದ ಆದೇಶ ಸಂಖ್ಯೆ: ಕಂಇ 335 ಟಿಎನ್ಆರ್ 2021(1), ದಿನಾಂಕ: 23.11.2021 ರಲ್ಲಿ 2021ನೇ ಸಾಲಿನಲ್ಲಿ ಸುರಿದ ಭಾರಿ ಮಳೆ/ಪ್ರವಾಹ/ನೆರೆಹಾವಳಿಯಿಂದ "ಎ" ಮತ್ತು "ಬಿ" ವರ್ಗ ಮನೆ ಹಾನಿ ಪ್ರಕರಣಗಳಿಗೆ SDRF/NDRF ಮಾರ್ಗಸೂಚಿಯಂತೆ ರೂ.95,100/-ಗಳ ಹಾಗೂ "ಸಿ" ವರ್ಗದ ಮನೆ ಹಾನಿ ಪ್ರಕರಣಗಳಿಗೆ ತಲಾ ರೂ.50,000/-ಗಳ ಪರಿಹಾರವನ್ನು ಜಿಲ್ಲಾಧಿಕಾರಿಗಳು ಪಿಡಿ ಖಾತೆಯಿಂದ

ಪಾವತಿಸಲು ಆದೇಶಿಸಿರುತ್ತದೆ. ಉಳಿದ ಪರಿಹಾರ ಧನವನ್ನು ಪ್ರಗತಿಗನುಗುಣವಾಗಿ DBT ಆಧಾರ್ ಆಧಾರಿತವಾಗಿ ಫಲಾನುಭವಿಗಳ ಬ್ಯಾಂಕ್ ಖಾತೆಗೆ ಬಿಡುಗಡೆಗೊಳಿಸಲು ಕ್ರಮವಹಿಸಲಾಗುತ್ತಿದೆ. ಹಾನಿಯಾದ ಮನೆಗಳ ವರ್ಗವನ್ನು ಕೆಳಕಂಡಂತೆ ವಿಂಗಡಿಸಲಾಗಿದೆ.

| ಕ್ರ. ಸಂ. | ಹಾನಿಯಾದ ಮನೆಯ ಪ್ರಮಾಣ | ಮನೆಯ ವರ್ಗ | ನಿಗದಿಪಡಿಸಲಾದ ಪರಿಹಾರ ಮೊತ್ತ |
|---|---|---|---|
| 1 | ಶೇ. 75ಕ್ಕಿಂತ ಹೆಚ್ಚು | ಸಂಪೂರ್ಣ ಮನೆ ಹಾನಿ-ಎ | ರೂ.5.00ಲಕ್ಷಗಳು |
| 2 | ಶೇ.25 ರಿಂದ 75ರಷ್ಟು | ಭಾಗಶಃ ಮನೆ ಹಾನಿ (ಪುನರ್ ನಿರ್ಮಾಣ)-ಬಿ2 | ರೂ.5.00ಲಕ್ಷಗಳು |
| 3 | | ಭಾಗಶಃ ಮನೆ ಹಾನಿ (ದುರಸ್ತಿ)-ಬಿ1 | ರೂ.3.00ಲಕ್ಷಗಳು |
| 4 | ಶೇ.15 ರಿಂದ 25ರಷ್ಟು | ಅಲ್ಪಸ್ವಲ್ಪ ಮನೆ ಹಾನಿ-ಸಿ | ರೂ.50,000/- |
| 5 | ಅನಧಿಕೃತ ಮನೆಗಳು (ಇರುವ ಜಾಗದಲ್ಲಿಯೇ ನಿರ್ಮಿಸಿ ಕೊಳ್ಳುವ ಮನೆಗಳು) | | ರೂ.1.00ಲಕ್ಷ |

ಸಂಖ್ಯೆ :ವಇ 33 ಹೆಚ್‌ಎಎಂ 2022

(ವಿ. ಸೋಮಣ್ಣ)
ವಸತಿ ಮತ್ತು ಮೂಲಸೌಲಭ್ಯ
ಅಭಿವೃದ್ಧಿ ಸಚಿವರು